# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| 1 | ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | 263 + 262 |
| 2 | ಸದಸ್ಯರ ಹೆಸರು | ಶ್ರೀಮತಿ ಭಾರತಿ ಶೆಟ್ಟಿ (ನಾಮನಿರ್ದೇಶನ ಹೊಂದಿದವರು) ಮತ್ತು ಡಾ: ವೈ.ಎ.ನಾರಾಯಣಸ್ವಾಮಿ (ಶಿಕ್ಷಕರ ಕ್ಷೇತ್ರ) |
| 3 | ಉತ್ತರಿಸಬೇಕಾದ ದಿನಾಂಕ | 09.12.2020 |
| 4 | ಉತ್ತರಿಸುವ ಸಚಿವರು | ಕಂದಾಯ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕಂದಾಯ ಇಲಾಖೆಯಲ್ಲಿ ಬಾಕಿ ಇರುವ ಪೋಡಿ ಪ್ರಕರಣಗಳ ಸಂಖ್ಯೆ ಎಷ್ಟು? (ವಿವರಗಳನ್ನು ನೀಡುವುದು) | ಕಳೆದ 5 ವರ್ಷಗಳಿಂದ ಕಂದಾಯ ಇಲಾಖೆಯಲ್ಲಿ ಪೋಡಿಗಾಗಿ **39,59,562** ಅರ್ಜಿಗಳು ಸ್ವೀಕೃತವಾಗಿದ್ದು ಆರಂಭಿಕ ಶಿಲ್ಕು ಅರ್ಜಿಗಳು ಸೇರಿದಂತೆ **39,09,745** ಅರ್ಜಿಗಳನ್ನು ವಿಲೇ ಗೊಳಿಸಿದ್ದು **5,03,215** ಅರ್ಜಿಗಳು ಬಾಕಿ ಇರುತ್ತವೆ. |
| ಆ) | ಕಳೆದ 5 ವರ್ಷಗಳಿಂದ ಕಂದಾಯ ಇಲಾಖೆಯಲ್ಲಿ ಪೋಡಿಗಾಗಿ ಬಂದಿರುವ ಅರ್ಜಿಗಳ ಸಂಖ್ಯೆ ಎಷ್ಟು ಹಾಗೂ ಬಾಕಿ ಇರುವ ಪ್ರಕರಣಗಳ ಸಂಖ್ಯೆ ಎಷ್ಟು; | **ಕಳೆದ 5 ವರ್ಷಗಳಿಂದ (2016-2020) ಕಂದಾಯ ಇಲಾಖೆಯಲ್ಲಿ ಪೋಡಿಗಾಗಿ ಸ್ವೀಕೃತವಾದ ಮತ್ತು ಬಾಕಿಯಿರುವ ಅರ್ಜಿಗಳ ವಿವರ**<br>ಪ್ರಾ.ಶಿಲ್ಕು: 4,53,398 ; ಸ್ವೀಕೃತಿ: 39,59,562 ; ಒಟ್ಟು: 44,12,960 ; ವಿಲೇ: 39,09,745 ; ಬಾಕಿ: 5,03,215 |
| ಇ) | ದೊಡ್ಡ ಪ್ರಮಾಣದಲ್ಲಿ ಪೋಡಿ ಪ್ರಕರಣಗಳು ಬಾಕಿ ಇರಲು ಕಾರಣವೇನು; | **ಪೋಡಿ ಪ್ರಕರಣಗಳು ಬಾಕಿ ಇರಲು ಕಾರಣಗಳು**<br>1) ಜಮೀನಿನ ಆಕಾರಬಂದು ಮತ್ತು ಪಹಣಿಗಳಲ್ಲಿ ದಾಖಲಾಗಿರುವ ವಿಸ್ತೀರ್ಣದಲ್ಲಿ ವ್ಯತ್ಯಾಸ ಹಾಗೂ ಪಹಣಿಯ ಕಾಲಂ 3 ಮತ್ತು 9 ರಲ್ಲಿರುವ ಕ್ಷೇತ್ರದಲ್ಲಿ ವ್ಯತ್ಯಾಸ<br>2) ಭೂಮಂಜೂರಾತಿ ಪ್ರಕರಣಗಳಲ್ಲಿ ನಮೂನೆ 1 ರಿಂದ 5 ಭರ್ತಿ ಮಾಡಬೇಕಾಗಿದ್ದು ಈ ವೇಳೆ ಮಂಜೂರಾತಿ ದಾಖಲೆಗಳು ಸರಿಯಾಗಿ ಲಭ್ಯವಾಗದೇ ಇರುವುದರಿಂದ<br>3) ಮೂಲ ಭೂದಾಖಲೆಗಳು/ಕಂದಾಯ ದಾಖಲೆಗಳು ಶಿಥಿಲವಾಗಿರುವುದನ್ನು ಪುನರ್ ನಿರ್ಮಾಣ ಮಾಡಲು ಹೆಚ್ಚಿನ ಕಾಲಾವಲಾಶ ಬೇಕಾಗುವುದು<br>4) ಭೂಮಂಜೂರಾತಿ ಪ್ರಕರಣಗಳಲ್ಲಿ ಮಂಜೂರಿಯಂತೆ ಮತ್ತು ಅನುಭವದಂತೆ ಕ್ಷೇತ್ರದಲ್ಲಿ ವ್ಯತ್ಯಾಸ ಮತ್ತು ಸರ್ವೆ ನಂಬರನಲ್ಲಿ ವ್ಯತ್ಯಾಸವಿರುವುದರಿಂದ<br>5) ಭೂಮಂಜೂರಾತಿ ಪ್ರಕರಣಗಳಲ್ಲಿ ಜಮೀನಿನ ಆಕಾರ ಬಂದಿನ ವಿಸ್ತೀರ್ಣಕ್ಕಿಂತ ಹೆಚ್ಚಿನ ಕ್ಷೇತ್ರಕ್ಕೆ ಮಂಜೂರಿ ಆದೇಶ ಮಾಡಿರುವುದರಿಂದ, ಮಂಜೂರಿ ಆದೇಶ ಮತ್ತು ಪಹಣಿ ಸರಿಪಡಿಸುವಲ್ಲಿ ತೊಂದರೆ ಇರುವುದು.<br>6) ಅರ್ಜಿದಾರರು ಹಕ್ಕು ಹೊಂದಿರುವ ಮತ್ತು ಅನುಭವದ ಸ.ನಂ ಬೇರೆ ಬೇರೆಯಾಗಿರುವುದು<br>7) ಅಳತೆ ವೇಳೆ ಗಡಿ ಮತ್ತು ಹಕ್ಕಿನ ಕುರಿತು ತಕರಾರು ಉದ್ಭವಿಸುವುದರಿಂದ<br>8) ಜಮೀನಿನ ಕುರಿತು ನ್ಯಾಯಾಲಯದಲ್ಲಿ ವಿವಾದಗಳಿರುವುದರಿಂದ. |

| | | |
|---|---|---|
| ಈ) | ಬೆಂಗಳೂರು ನಗರ ಜಿಲ್ಲೆಯಲ್ಲಿ ಪೋಡಿಗಾಗಿ ಬಂದ ಅರ್ಜಿಗಳನ್ನು ವಿಲೇವಾರಿ ಮಾಡಲು ಸಂಬಂಧಪಟ್ಟ ಅಧಿಕಾರಿಗಳು ಲಕ್ಷಾಂತರ ರೂಪಾಯಿ ಬೇಡಿಕೆ ಇಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬೆಂಗಳೂರು ನಗರ ಜಿಲ್ಲಾ ವ್ಯಾಪ್ತಿಯಲ್ಲಿ ಪೋಡಿ ಅರ್ಜಿಗಳನ್ನು ವಿಲೇವಾರಿ ಮಾಡಲು ಅಧಿಕಾರಿಗಳು ಲಕ್ಷಾಂತರ ರೂಪಾಯಿ ಬೇಡಿಕೆ ಇಡುತ್ತಿರುವ ಬಗ್ಗೆ ಯಾವುದೇ ನಿರ್ದಿಷ್ಟ ದೂರುಗಳು ಬಂದಿರುವುದಿಲ್ಲ.<br>ಒಂದು ವೇಳೆ ಯಾವುದೇ ಪೋಡಿ ಅರ್ಜಿಯ ವಿಲೇವಾರಿ ಮಾಡಲು ಭೂಮಾಪಕರು/ಅಧಿಕಾರಿಗಳು ಸಾರ್ವಜನಿಕರಿಂದ ಹಣದ ಬೇಡಿಕೆ ಇಟ್ಟಿರುವ ಬಗ್ಗೆ ನಿರ್ದಿಷ್ಟವಾದ ದೂರುಗಳು ಸ್ವೀಕೃತವಾದ ತಕ್ಷಣ ಸಂಬಂಧಿಸಿದ ಭೂದಾಖಲೆಗಳ ಜಂಟಿ ನಿರ್ದೇಶಕರು/ಭೂದಾಖಲೆಗಳ ಉಪ ನಿರ್ದೇಶಕರುಗಳಿಂದ ತನಿಖಾ ವರದಿ ಪಡೆದು, ಇಲಾಖಾ ವಿಚಾರಣೆಯನ್ನು ನಡೆಸಿ, ತಪ್ಪಿತಸ್ಥ ನೌಕರರ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳಲಾಗುವುದು. |
| ಉ) | ಬಂದಿದ್ದಲ್ಲಿ ಅಂತಹ ಪ್ರಕರಣಗಳು ಎಷ್ಟು (ವಿವರಗಳನ್ನು ನೀಡುವುದು) | |
| ಊ) | ನಿಗದಿತ ಸಮಯದಲ್ಲಿ ಪೋಡಿ ಪ್ರಕರಣ ಗಳನ್ನು ಇತ್ಯರ್ಥ ಮಾಡದೆ ವಿಳಂಬ ಮಾಡಿರುವ ಅಧಿಕಾರಿ / ನೌಕರರ ವಿರುದ್ಧ ಸರ್ಕಾರವು ತೆಗೆದುಕೊಂಡ ಕ್ರಮವೇನು? | ಭೂಮಾಪನ ಇಲಾಖೆಯಲ್ಲಿ ಪೋಡಿ ಪ್ರಕರಣಗಳನ್ನು ಇತ್ಯರ್ಥ ಮಾಡದೆ ವಿಳಂಬ ಮಾಡಿರುವ ಅಧಿಕಾರಿ/ನೌಕರರ ವಿರುದ್ಧ ಶಿಸ್ತು ಕ್ರಮ ಜರುಗಿಸಿ ದಂಡನೆಯನ್ನು ನೀಡಲಾಗುತ್ತಿದೆ.<br>ಅದೇ ರೀತಿಯಾಗಿ ಬೆಂಗಳೂರು ನಗರ ಜಿಲ್ಲಾ ವ್ಯಾಪ್ತಿಯಲ್ಲಿ ನಿಗದಿತ ಸಮಯದಲ್ಲಿ ಪೋಡಿ ಪ್ರಕರಣಗಳನ್ನು ಇತ್ಯರ್ಥ ಮಾಡದೆ ವಿಳಂಬ ಮಾಡಿರುವ 14 ಜನ ಅಧಿಕಾರಿ / ನೌಕರರ ವಿರುದ್ಧ ಶಿಸ್ತು ಕ್ರಮ ಜರುಗಿಸಲಾಗುತ್ತಿದೆ. |

<u>ಸಂಖ್ಯೆ: ಕಂಇ 171 ಎಸ್‌ಎಸ್‌ಸಿ 2020</u>

**(ಆರ್.ಅಶೋಕ)**
ಕಂದಾಯ ಸಚಿವರು